# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 353

ಮಾನ್ಯ ಸದಸ್ಯರ ಹೆಸರು : ಡಾ: ವೈ.ಎ.ನಾರಾಯಣಸ್ವಾಮಿ

(ಶಿಕ್ಷಕರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ: : 03-02-2021

ಉತ್ತರಿಸುವ ಮಾನ್ಯ ಸಚಿವರು : ಕೃಷಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಫುಡ್ ಕರ್ನಾಟಕ ಲಿಮಿಟೆಡ್ ಎಂಬ ಸಂಸ್ಥೆಯು ಕೃಷಿ ಇಲಾಖೆ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | **ಬಂದಿದೆ.** |
| ಆ) | ಬಂದಿದ್ದಲ್ಲಿ, ಇದನ್ನು ಸ್ಥಾಪನೆ ಮಾಡಿದ್ದು ಯಾವಾಗ, ಇದರ ಧ್ಯೇಯೋದ್ದೇಶಗಳೇನು; | ಫುಡ್ ಕರ್ನಾಟಕ ಲಿಮಿಟೆಡ್ ಅನ್ನು ದಿನಾಂಕ: 29.04.2003 ರಂದು "ವಿಶೇಷ ಉದ್ದೇಶಿತ ಸಂಸ್ಥೆ"ಯಾಗಿ KSIIDC (Karnataka State Industrial and Infrastructure Development Corporation)ಯಡಿ ಸ್ಥಾಪಿಸಲಾಯಿತು.<br><br>**ಫುಡ್ ಕರ್ನಾಟಕ ಲಿಮಿಟೆಡ್ ಸಂಸ್ಥೆಯ ಧ್ಯೇಯೋದ್ದೇಶಗಳು:**<br><br>❖ ರಾಜ್ಯದ ಗ್ರಾಮೀಣ ಭಾಗದಲ್ಲಿ ರೈತರ ಕೃಷಿ ಹಾಗೂ ತೋಟಗಾರಿಕೆ ಉತ್ಪನ್ನಗಳ ಮೌಲ್ಯವರ್ಧನೆ ಮತ್ತು ಆಹಾರ ಸಂಸ್ಕರಣ ಉದ್ದಿಮೆಗಳ ಸ್ಥಾಪನೆಗೆ ಅವಶ್ಯಕವಿರುವ ಸಾಮೂದಾಯಿಕ ಮೂಲಭೂತ ಸೌಕರ್ಯಗಳನ್ನು ಸರ್ಕಾರ ಹಾಗೂ ಖಾಸಗಿ ಸಹಭಾಗಿತ್ವದಲ್ಲಿ (PPP Model) ಸ್ಥಾಪಿಸಿ, ಉದ್ಯೋಗ ಸೃಷ್ಟಿಸುವುದರ ಜೊತೆಗೆ ರೈತರ ಕೃಷಿ ಹಾಗೂ ತೋಟಗಾರಿಕೆ ಉತ್ಪನ್ನಗಳ ಕಟಾವು ನಂತರದ ನಷ್ಟವನ್ನು ತಗ್ಗಿಸಿ, ರೈತರ ಆದಾಯವನ್ನು ವೃದ್ಧಿಸುವುದು.<br><br>❖ ಆಹಾರ ಸಂಸ್ಕರಣ ಉದ್ದಿಮೆಗಳ ಸ್ಥಾಪನೆಗೆ ಅವಶ್ಯಕವಿರುವ ಸಾಮೂದಾಯಿಕ ಮೂಲಭೂತ ಸೌಕರ್ಯಗಳಾದ ಶೀಥಲೀಕರಣ ಘಟಕ, |

| | | |
|---|---|---|
| | | ಪ್ರೀಕೂಲಿಂಗ್ ಘಟಕ, ಧಾನ್ಯ, ಹಣ್ಣು ಮತ್ತು ತರಕಾರಿಗಳನ್ನು ಶ್ರೇಣಿಕರಿಸುವ ಮತ್ತು ಪ್ಯಾಕೇಜಿಂಗ್ ಯಂತ್ರೋಪಕರಣಗಳು, ಪ್ಯಾಕ್ ಹೌಸ್, ಸಂಗ್ರಹಣಾ ಗೋದಾಮು, ಆಹಾರ ಪಾರ್ಕಿನ ವಿದ್ಯುದ್ದೀಕರಣ, ಆಹಾರ ಪ್ರಯೋಗಾಲಯ, ಒಳ ಚರಂಡಿ ನಿರ್ಮಾಣ, ವೇಬ್ರಿಡ್ಜ್ ಸ್ಥಾಪನೆ, ETP, ಕೇಂದ್ರಿಕೃತ ಆಡಳಿತ ಕಛೇರಿ ನಿರ್ಮಾಣ ಹಾಗೂ ಪಾರ್ಕಿನಲ್ಲಿ ರಸ್ತೆಗಳ ನಿರ್ಮಾಣವನ್ನು ಆಹಾರಪಾರ್ಕಿನ ಪ್ರವರ್ತಕರು ಕೈಗೊಂಡು ಆಹಾರಪಾರ್ಕಿನಲ್ಲಿ ಅತಿ ಸಣ್ಣ, ಸಣ್ಣ & ಮಧ್ಯಮ (MSME) ವರ್ಗದ ಆಹಾರ ಸಂಸ್ಕರಣ ಘಟಕಗಳ ಸ್ಥಾಪನೆಗೆ ಮುಂದಾಗುವ ಎಲ್ಲಾ ಉದ್ದಿಮೆದಾರರಿಗೆ ಈ ಮೂಲಭೂತ ಸೌಕರ್ಯಗಳನ್ನು ಬಳಸಲು ಅವಕಾಶ ಕಲ್ಪಿಸುವುದು.<br><br>❖ ಆಹಾರ ಪಾರ್ಕುಗಳ ಸ್ಥಾಪನೆಯಿಂದ ಉದ್ದಿಮೆದಾರರಿಗೆ ಆಹಾರ ಸಂಸ್ಕರಣ ಘಟಕಗಳನ್ನು ನಿರ್ವಹಿಸಲು ಬೇಕಾಗುವ ಇತರೆ ಅವಶ್ಯ ಕಚ್ಚಾವಸ್ತುಗಳನ್ನು ಪೂರೈಸುವ ಪೋಷಕ ಘಟಕಗಳು ಸ್ಥಾಪನೆಗೊಂಡು ಆ ಭಾಗದಲ್ಲಿ ಆರ್ಥಿಕ ಮಟ್ಟದಲ್ಲಿ ಸುಧಾರಣೆಯಾಗುವುದರ ಜೊತೆಗೆ ಸುತ್ತಮುತ್ತಲಿನ ಪ್ರದೇಶದ ಅಭಿವೃದ್ಧಿಯಾಗುವುದು. |
| ಇ) | ರಾಜ್ಯದಲ್ಲಿ ಹಾಲಿ ಕೆಲಸ ನಿರ್ವಹಿಸುತ್ತಿರುವ ಆಹಾರ ಪಾರ್ಕ್ ಯಾವುವು; ಇವುಗಳನ್ನು ಸ್ಥಾಪನೆ ಮಾಡಿರುವ ಉದ್ದೇಶ ಏನು; | **ಅ. ಕೇಂದ್ರ ಸರ್ಕಾರ ಹಾಗೂ ಖಾಸಗಿ ಸಹಭಾಗಿತ್ವದಲ್ಲಿ ಅಭಿವೃದ್ಧಿಪಡಿಸಿರುವ ಆಹಾರ ಪಾರ್ಕುಗಳು**<br>1. ಮೆ॥ ಇಂಡಿಯಾ ಮೆಗಾ ಫುಡ್ಪಾರ್ಕ್, ತುಮಕೂರು<br>2. ಮೆ॥ ಫೆವೋರಿಟ್ ಮೆಗಾ ಫುಡ್ಪಾರ್ಕ್, ಕೆ.ಆರ್. ಪೇಟೆ ತಾಲ್ಲೂಕು, ಮಂಡ್ಯಜಿಲ್ಲೆ<br><br>**ಆ. ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಹಾಗೂ ಖಾಸಗಿ ಸಹಭಾಗಿತ್ವದಲ್ಲಿ ಅಭಿವೃದ್ಧಿ ಪಡಿಸಿರುವ ಆಹಾರ ಪಾರ್ಕುಗಳು.**<br>1. ಇನ್ನೋವ ಅಗ್ರಿ ಬಯೋ ಪಾರ್ಕ್, ಮಾಲೂರು<br>2. ಗ್ರೀನ್ ಫುಡ್ ಪಾರ್ಕ್, ಬಾಗಲಕೋಟೆ<br>3. ಅಕ್ಷಯ ಫುಡ್ ಪಾರ್ಕ್, ಹಿರಿಯೂರು<br>4. ಜೇವರ್ಗಿ ಅಗ್ರೋ ಫುಡ್ಪಾರ್ಕ್, ಜೇವರ್ಗಿ<br><br>ರಾಜ್ಯದ ಗ್ರಾಮೀಣ ಭಾಗದಲ್ಲಿ ರೈತರ ಕೃಷಿ ಹಾಗೂ ತೋಟಗಾರಿಕೆ ಉತ್ಪನ್ನಗಳ ಮೌಲ್ಯವರ್ಧನೆ ಮತ್ತು ಆಹಾರ ಸಂಸ್ಕರಣ ಉದ್ದಿಮೆಗಳ ಸ್ಥಾಪನೆಗೆ ಅವಶ್ಯಕವಿರುವ ಸಾಮೂದಾಯಿಕ ಮೂಲಭೂತ |

| | | |
|---|---|---|
| | | ಸೌಕರ್ಯಗಳನ್ನು ಸರ್ಕಾರ ಹಾಗೂ ಖಾಸಗಿ ಸಹಭಾಗಿತ್ವದಲ್ಲಿ (PPP Model) ಸ್ಥಾಪಿಸಿ, ಉದ್ಯೋಗ ಸೃಷ್ಟಿಸುವುದರ ಜೊತೆಗೆ ರೈತರ ಕೃಷಿ ಹಾಗೂ ತೋಟಗಾರಿಕೆ ಉತ್ಪನ್ನಗಳ ಕಟಾವು ನಂತರದ ನಷ್ಟವನ್ನು ತಗ್ಗಿಸಿ, ರೈತರ ಆದಾಯವನ್ನು ವೃದ್ಧಿಸುವುದು.<br><br>ಕಾರ್ಯ ಸಾಧ್ಯವಾದ ಪೂರ್ವೈಕೆ ಸರಪಳಿಯನ್ನು ಒದಗಿಸುವ ಮೂಲಕ ಬೆಳೆಗಾರರ ಮತ್ತು ಸಂಸ್ಕರಣ ಘಟಕಗಳ ನಡುವಿನ ಅಂತರವನ್ನು ಕಡಿಮೆ ಮಾಡುವುದು. |
| ಈ) | ಫುಡ್ ಕರ್ನಾಟಕ ಲಿಮಿಟೆಡ್‌ನಿಂದ ಮೇಲ್ಕಂಡ ಫುಡ್ ಪಾರ್ಕ್‌ಗಳಿಗೆ ಯಾವುದೇ ಸಹಾಯ ಇಲ್ಲದೇ ವಿನಾಕಾರಣ ಫುಡ್ ಪಾರ್ಕ್‌ಗಳಿಗೆ ತೊಂದರೆ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಆಹಾರ ಸಂಸ್ಕರಣೆ ಹಾಗೂ ಕೃಷಿ ರಫ್ತು ವಲಯದ ಅಭಿವೃದ್ಧಿಗಾಗಿ ಉನ್ನತ ಮಟ್ಟದಲ್ಲಿ ಸೂಕ್ತ ತೀರ್ಮಾನಗಳನ್ನು ಕೈಗೊಳ್ಳಲು, ಪ್ರಗತಿ ಪರಿಶೀಲನೆ ಕೈಗೊಳ್ಳಲು ಹಾಗೂ ರಾಜ್ಯದ ಆಹಾರ ಪಾರ್ಕ್‌ಗಳಲ್ಲಿ ಆಹಾರ ಸಂಸ್ಕರಣೆಯನ್ನು ಉತ್ತೇಜಿಸುವ ನಿಟ್ಟಿನಲ್ಲಿ ಸರ್ಕಾರದ ಆದೇಶ ಸಂ:ಕೃಇ/30/ಕೃರಾಗೋ/2019, ದಿನಾಂಕ:18.12.2019 (ಪ್ರತಿ ಲಗತ್ತಿಸಿದೆ) ರನ್ವಯ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಕೃಷಿ, ವಾಣಿಜ್ಯ, ಆಹಾರ ಸಂಸ್ಕರಣೆ ಮತ್ತು ರಫ್ತು ಅಭಿವೃದ್ಧಿ ಉನ್ನತ ಮಟ್ಟದ ಸಮಿತಿಯನ್ನು ರಚಿಸಲಾಗಿದೆ. ಹಾಗೆಯೇ, ಜಿಲ್ಲಾಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಕೃಷಿ, ವಾಣಿಜ್ಯ, ಆಹಾರ ಸಂಸ್ಕರಣೆ ಮತ್ತು ರಫ್ತು ಅಭಿವೃದ್ಧಿ ಸಮಿತಿಯನ್ನು ರಚಿಸಲಾಗಿದೆ. |
| ಉ) | ಫುಡ್ ಕರ್ನಾಟಕ ಲಿಮಿಟೆಡ್ ಉದ್ದೇಶಗಳು ಇದುವರೆವಿಗೂ ಈಡೇರದೇ ಇರುವುದಕ್ಕೆ ಕಾರಣರಾಗಿರುವ ಅಧಿಕಾರಿಗಳು ಯಾರು; ಅಂತಹರವರ ವಿರುದ್ಧ ಸರ್ಕಾರವು ಕೈಗೊಂಡಿರುವ ಕ್ರಮಗಳು ಯಾವುವು; | ಉದ್ಭವಿಸುವುದಿಲ್ಲ. |

**ಸಂಖ್ಯೆ:- ಕೃಇ/17/ಕೃಕೈಉ/2021**

(ಬಿ.ಸಿ.ಪಾಟೀಲ್)
ಕೃಷಿ ಸಚಿವರು

File No.AGRI-AFT/30/2019-AGRI_PLAN_B-AGRICULTURE Secretariat

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ರಾಜ್ಯದಲ್ಲಿ ಆಹಾರ ಸಂಸ್ಕರಣಾ ಕ್ಷೇತ್ರ ಹಾಗೂ ಕೃಷಿ ಸಂಬಂಧಿತ ರಫ್ತು ಉತ್ತೇಜನಕ್ಕಾಗಿ ಉನ್ನತ ಮಟ್ಟದ ಸಮಿತಿ ರಚಿಸುವ ಬಗ್ಗೆ.

ಓದಲಾಗಿದೆ:
1. ಸರ್ಕಾರದ ಆದೇಶ ಸಂಖ್ಯೆ: ಕೃಇ 94 ಕೃಉಇ 2015, ದಿ:11.12.2015.
2. ದಿ:29.06.2019 ರಂದು ನಡೆದ ಆಹಾರ ಕರ್ನಾಟಕ ನಿಯಮಿತದ 64ನೇ ಆಡಳಿತ ಮಂಡಳಿ ಸಭೆಯ ನಡವಳಿಗಳು
3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೃಷಿ ಉತ್ಪನ್ನಗಳ ಸಂಸ್ಕರಣೆ ಹಾಗೂ ರಫ್ತು ನಿಗಮ ನಿಯಮಿತ ಇವರ ಪತ್ರ ಸಂ:ಕೆಪೆಕ್/ಸಮಿತಿ/2019-20, ದಿ:06.09.2019.

******

ಪ್ರಸ್ತಾವನೆ :

ಮೇಲೆ ಕ್ರಮ ಸಂಖ್ಯೆ:1 ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿ ಕೃಷಿ ಮತ್ತು ಸಂಬಂಧಿತ ವಲಯಗಳಾದ ತೋಟಗಾರಿಕೆ, ಪಶುಸಂಗೋಪನೆ, ಮೀನುಗಾರಿಕೆ, ಆಹಾರ ಸಂಸ್ಕರಣೆ ಇವುಗಳು ಕೃಷಿ ಸಮುದಾಯದ ಜೀವನೋಪಾಯದ ಅಭಿವೃದ್ಧಿಗೆ ನೇರ ಪರಿಣಾಮ ಬೀರುವುದರಿಂದ ಈ ವಲಯಗಳ ಕುರಿತು ಹೆಚ್ಚಿನ ಆದ್ಯತೆ ನೀಡಲು, ರೈತರಿಗೆ ಹೆಚ್ಚಿನ ಆದಾಯ ತರಲು ಹಾಗೂ ರಾಜ್ಯದ ಆರ್ಥಿಕ ಅಭಿವೃದ್ಧಿಗೆ ಕೃಷಿ ಮತ್ತು ತೋಟಗಾರಿಕೆ ಹಾಗೂ ಇತರೆ ವಲಯಗಳ ಉತ್ಪನ್ನಗಳಿಗೆ ಮೌಲ್ಯವರ್ಧನೆ ತರಲು ಹಾಗೂ ಕೃಷಿ ಹಾಗೂ ಆಹಾರ ಸಂಸ್ಕರಣೆಯಲ್ಲಿ ಸಮಗ್ರ ಅಭಿವೃದ್ಧಿ ಹೊಂದಲು ಅವಶ್ಯಕವಾಗುವಂತೆ ಕರ್ನಾಟಕ ಕೃಷಿ ವಾಣಿಜ್ಯ ಹಾಗೂ ಆಹಾರ ಸಂಸ್ಕರಣೆ ನೀತಿ 2015ನ್ನು ರಚಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ:2 ರಲ್ಲಿ ಓದಲಾದ ನಡವಳಿಯಲ್ಲಿ ಆಹಾರ ಸಂಸ್ಕರಣಾ ಕ್ಷೇತ್ರ ಹಾಗೂ ಕೃಷಿ ಸಂಬಂಧಿತ ರಫ್ತು ಉತ್ತೇಜನಕ್ಕಾಗಿ ರಾಜ್ಯ ಮಟ್ಟದಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿ ಹಾಗೂ ಜಿಲ್ಲಾಧಿಕಾರಿಗಳವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಕೃಷಿ ವಾಣಿಜ್ಯ, ಆಹಾರ ಸಂಸ್ಕರಣೆ ಮತ್ತು ಕೃಷಿ ರಫ್ತು ಅಭಿವೃದ್ಧಿ ಸಮಿತಿಯನ್ನು ರಚಿಸಲು ತೀರ್ಮಾನಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ:3 ರಲ್ಲಿ ಓದಲಾದ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೃಷಿ ಉತ್ಪನ್ನಗಳ ಸಂಸ್ಕರಣೆ ಹಾಗೂ ರಫ್ತು ನಿಗಮ ನಿಯಮಿತ ಇವರ ಪತ್ರದಲ್ಲಿ ಕರ್ನಾಟಕ ರಾಜ್ಯದಲ್ಲಿ ಆಹಾರ ಸಂಸ್ಕರಣಾ ವಲಯ ಹಾಗೂ ಕೃಷಿ ರಫ್ತು ಬಲಪಡಿಸಲು, ವಿಶೇಷವಾಗಿ ಆಹಾರ ಪಾರ್ಕುಗಳನ್ನು ಬಲಪಡಿಸಲು ಹಾಗೂ ಸಂಬಂಧಿತ ವಿವಿಧ

ಇಲಾಖೆಗಳ ನಡುವೆ ಸಮನ್ವಯ ಸಾಧಿಸಲು, ಸರ್ಕಾರದ ಉನ್ನತ ಮಟ್ಟದಲ್ಲಿ ಚರ್ಚಿಸಿ ಸೂಕ್ತ ತೀರ್ಮಾನಗಳನ್ನು ಕೈಗೊಳ್ಳಲು, ಸಂಬಂಧಿತ ಇಲಾಖೆಗಳಿಗೆ ಮಾರ್ಗದರ್ಶನ ನೀಡಲು. ಯೋಜನೆ/ಕಾರ್ಯಕ್ರಮಗಳ ಉಸ್ತುವಾರಿ ಮತ್ತು ಪ್ರಗತಿ ಪರಿಶೀಲನೆ ಕೈಗೊಳ್ಳಲು ಅನುವಾಗುವಂತೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿ ಸ್ಥಾಪಿಸಲು ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಕೃಷಿ ವಾಣಿಜ್ಯ, ಆಹಾರ ಸಂಸ್ಕರಣೆ ಮತ್ತು ಕೃಷಿ ರಫ್ತು ಅಭಿವೃದ್ಧಿ ಸಮಿತಿಯನ್ನು ರಚಿಸುವಂತೆ ಕೋರಲಾಗಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃಇ 30 ಕೃರಾಗೊ 2019, ಬೆಂಗಳೂರು, ದಿ:18-12-2019.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಆಹಾರ ಸಂಸ್ಕರಣಾ ಕ್ಷೇತ್ರ ಹಾಗೂ ಕೃಷಿ ರಫ್ತು ವಲಯದ ಅಭಿವೃದ್ಧಿಗಾಗಿ ಸರ್ಕಾರದ ಉನ್ನತ ಮಟ್ಟದಲ್ಲಿ ಚರ್ಚಿಸಿ ಸೂಕ್ತ ತೀರ್ಮಾನಗಳನ್ನು ಕೈಗೊಳ್ಳಲು, ಸಂಬಂಧಿತ ಇಲಾಖೆಗಳಿಗೆ ಮಾರ್ಗದರ್ಶನ ನೀಡಲು, ಯೋಜನೆ/ಕಾರ್ಯಕ್ರಮಗಳ ಉಸ್ತುವಾರಿ ಮತ್ತು ಪ್ರಗತಿ ಪರಿಶೀಲನೆ ಕೈಗೊಳ್ಳಲು ರಾಜ್ಯ ಮಟ್ಟದ ಉನ್ನತ ಮಟ್ಟದ ಸಮಿತಿ ಹಾಗೂ ಜಿಲ್ಲಾ ಮಟ್ಟದ ಸಮಿತಿಗಳನ್ನು ಈ ಕೆಳಕಂಡಂತೆ ರಚಿಸಿ ಆದೇಶಿಸಲಾಗಿದೆ.

ರಾಜ್ಯಮಟ್ಟದ ಕೃಷಿ ವಾಣಿಜ್ಯ, ಆಹಾರ ಸಂಸ್ಕರಣೆ ಮತ್ತು ಕೃಷಿ ರಫ್ತು ಅಭಿವೃದ್ಧಿ ಉನ್ನತ ಮಟ್ಟದ ಸಮಿತಿ

| ಕ್ರಸಂ | ಹುದ್ದೆ ಮತ್ತು ಇಲಾಖೆ | ಅಧ್ಯಕ್ಷರು/ ಸದಸ್ಯರು |
|---|---|---|
| 1 | ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರು | ಅಧ್ಯಕ್ಷರು |
| 2 | ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ಕೃಷಿ ಇಲಾಖೆ | ಸದಸ್ಯರು |
| 3 | ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ | ಸದಸ್ಯರು |
| 4 | ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ | ಸದಸ್ಯರು |
| 5 | ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ಸದಸ್ಯರು |
| 6 | ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ಕಂದಾಯ ಇಲಾಖೆ | ಸದಸ್ಯರು |
| 7 | ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ಇಂಧನ ಇಲಾಖೆ | ಸದಸ್ಯರು |

| | | |
|---|---|---|
| 8 | ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ | ಸದಸ್ಯರು |
| 9 | ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಇಲಾಖೆ | ಸದಸ್ಯರು |
| 10 | ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು/ ವಿಶೇಷ ಕಾರ್ಯದರ್ಶಿಗಳು, ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ | ಸದಸ್ಯರು |
| 11 | ಆಯುಕ್ತರು, ಕೈಗಾರಿಕೆ ಅಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಸದಸ್ಯರು | ಸದಸ್ಯರು |
| 12 | ಆಯುಕ್ತರು, ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳ ನಿರ್ದೇಶನಾಲಯ | ಸದಸ್ಯರು |
| 13 | ಆಯುಕ್ತರು, ಕೃಷಿ ಇಲಾಖೆ | ಸದಸ್ಯರು |
| 14 | ನಿರ್ದೇಶಕರು, ತೋಟಗಾರಿಕೆ ಇಲಾಖೆ | ಸದಸ್ಯರು |
| 15 | ಆಯುಕ್ತರು, ಪಶುಸಂಗೋಪನೆ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ | ಸದಸ್ಯರು |
| 16 | ನಿರ್ದೇಶಕರು, ಮೀನುಗಾರಿಕೆ ಇಲಾಖೆ | ಸದಸ್ಯರು |
| 17 | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಮತ್ತು ಕಾರ್ಯನಿರ್ವಾಹಕ ಸದಸ್ಯ, ಕೆಐಎಡಿಬಿ | ಸದಸ್ಯರು |
| 18 | ಕನ್ವೀನರ್, SLBC, | ಸದಸ್ಯರು |
| 19 | ಮುಖ್ಯ ಪ್ರಧಾನ ವ್ಯವಸ್ಥಾಪಕರು, ನಬಾರ್ಡ್, ಕರ್ನಾಟಕ | ಸದಸ್ಯರು |
| 20 | ವ್ಯವಸ್ಥಾಪಕ ನಿರ್ದೇಶಕರು, ಎಟಿಪಿಸಿ, ಬೆಂಗಳೂರು | ಸದಸ್ಯರು |
| 21 | ಉಪ ಪ್ರಧಾನ ವ್ಯವಸ್ಥಾಪಕರು, ಅಪೇಡಾ, ಬೆಂಗಳೂರು | ಸದಸ್ಯರು |
| 22 | ಎರಡು ಕೈಗಾರಿಕಾ ಸಂಸ್ಥೆಗಳ ಪ್ರತಿನಿಧಿಗಳು | ಸದಸ್ಯರು |
| 23 | ವ್ಯವಸ್ಥಾಪಕ ನಿರ್ದೇಶಕರು, ಕಪೆಕ್ ಲಿಮಿಟೆಡ್, ಬೆಂಗಳೂರು | ಸದಸ್ಯ-ಕಾರ್ಯದರ್ಶಿ |

**ರಾಜ್ಯ ಮಟ್ಟದ ಸಮಿತಿಯ ಕರ್ತವ್ಯ ಮತ್ತು ಜವಾಬ್ದಾರಿಗಳು:**

- ರಾಜ್ಯದ ವಿವಿಧ ಇಲಾಖೆಗಳು ಮತ್ತು ಸಂಸ್ಥೆಗಳು ಅನುಷ್ಠಾನಗೊಳಿಸುತ್ತಿರುವ ಆಹಾರ ಸಂಸ್ಕರಣೆ ಹಾಗೂ ಕೃಷಿ ವಾಣಿಜ್ಯಕ್ಕೆ ಸಂಬಂಧಿಸಿದ ಯೋಜನೆಗಳ ಉಸ್ತುವಾರಿ, ಪ್ರಗತಿ ಪರಿಶೀಲನೆ ಹಾಗೂ ಮೌಲ್ಯಮಾಪನಕ್ಕೆ ಕ್ರಮ.
- ರಾಜ್ಯದ ಆಹಾರ ಪಾರ್ಕುಗಳ ಅಭಿವೃದ್ಧಿಗೆ ಕಾರ್ಯ ಯೋಜನೆ ರೂಪಿಸಲು ಕ್ರಮ.

- ಕೇಂದ್ರ ಸರ್ಕಾರದ ಆಹಾರ ಸಂಸ್ಕರಣಾ ಯೋಜನೆಗಳೊಂದಿಗೆ ರಾಜ್ಯ ಸರ್ಕಾರದ ಯೋಜನೆಗಳನ್ನು ಸಮ್ಮಿಲನಗೊಳಿಸುವ (Convergence) ಮೂಲಕ ವಿವಿಧ ಸಂಸ್ಕರಣ ಚಟುವಟಿಕೆಗೆ ಹೆಚ್ಚು ಅನುದಾನ ಲಭ್ಯವಾಗಿಸಲು ಕ್ರಮ.
- ಕೇಂದ್ರ ಸರ್ಕಾರದ ಕೃಷಿ ರಫ್ತು ನೀತಿಯನ್ನು ಸೂಕ್ತ ಕಾರ್ಯತಂತ್ರದೊಂದಿಗೆ ರಾಜ್ಯದಲ್ಲಿ ಅನುಷ್ಠಾನಗೊಳಿಸಲು ಕ್ರಮ.
- ಕೃಷಿ ರಫ್ತನ್ನು ಪ್ರೋತ್ಸಾಹಿಸಲು ರಾಜ್ಯ ಸರ್ಕಾರದ ವತಿಯಿಂದ ಹೊಸ ಕಾರ್ಯಕ್ರಮಗಳ/ಯೋಜನೆಗಳ ಅನುಷ್ಠಾನಕ್ಕೆ ಕ್ರಮ.
- ಕರ್ನಾಟಕ ಕೃಷಿ ವಾಣಿಜ್ಯ ಹಾಗೂ ಆಹಾರ ಸಂಸ್ಕರಣಾ ನೀತಿ 2015ರ ಪರಾಮರ್ಶೆ ಮತ್ತು ಅವಶ್ಯಕತೆ ಆಧರಿಸಿ ನೀತಿಗೆ ಬದಲಾವಣೆ ತರಲು ಕ್ರಮ.
- ರಾಜ್ಯದ ಆಹಾರ ಸಂಸ್ಕರಣ ಸಾಮರ್ಥ್ಯವನ್ನು ಆಧರಿಸಿ ಕೃಷಿ ವಾಣಿಜ್ಯ ಮತ್ತು ಆಹಾರ ಸಂಸ್ಕರಣೆಗೆ ಸಂಬಂಧಪಟ್ಟಂತೆ ಹೊಸ ಯೋಜನೆಗಳನ್ನು ಗುರುತಿಸಿ ಅನುಷ್ಠಾನಗೊಳಿಸಲು ಕ್ರಮ.
- ಆಹಾರ ಸಂಸ್ಕರಣೆಗೆ ಸಂಬಂಧಿಸಿದಂತೆ ಕೇಂದ್ರ ಹಾಗೂ ರಾಜ್ಯ ಸರ್ಕಾರದ ವಿವಿಧ ಇಲಾಖೆಗಳು ಮತ್ತು ಸಂಸ್ಥೆಗಳ ನಡುವೆ ಸಮನ್ವಯ ಸಾಧಿಸಿ ಆಹಾರ ಸಂಸ್ಕರಣಾ ಕ್ಷೇತ್ರದ ಅಭಿವೃದ್ಧಿಗೆ ಕ್ರಮ.
- ಆಹಾರ ಸಂಸ್ಕರಣೆ ಮತ್ತು ಕೃಷಿ ರಫ್ತಿಗೆ ಸಂಬಂಧಿಸಿದಂತೆ ಅನುಭವಿ ಸಲಹೆಗಾರರು, ಯೋಜನೆ ನಿರ್ವಹಣಾ ಏಜನ್ಸಿ (PMA) ಹಾಗೂ ತಜ್ಞರನ್ನು ಗುರುತಿಸಿ ಸಂಬಂಧಪಟ್ಟ ಸಂಸ್ಥೆಗಳಿಗೆ/ಇಲಾಖೆಗಳಿಗೆ ನೇಮಿಸಲು ಕ್ರಮ.
- ಕೃಷಿ ವಾಣಿಜ್ಯ, ಆಹಾರ ಸಂಸ್ಕರಣೆ ಮತ್ತು ಕೃಷಿ ರಫ್ತು ಉತ್ತೇಜನಕ್ಕೆ ಸಂಬಂಧಪಟ್ಟ ಇನ್ನಾವುದೇ ಕರ್ತವ್ಯ ಮತ್ತು ಜವಾಬ್ದಾರಿಗಳು

### ಜಿಲ್ಲಾ ಮಟ್ಟದ ಕೃಷಿ ವಾಣಿಜ್ಯ, ಆಹಾರ ಸಂಸ್ಕರಣೆ ಮತ್ತು ಕೃಷಿ ರಫ್ತು ಅಭಿವೃದ್ಧಿ ಸಮಿತಿ

| ಕ್ರ ಸಂ | ಹುದ್ದೆ ಮತ್ತು ಇಲಾಖೆ | ಅಧ್ಯಕ್ಷರು/ಸದಸ್ಯರು |
|---|---|---|
| 1 | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2 | ಜಿಲ್ಲಾ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು | ಸದಸ್ಯರು |
| 3 | ಜಿಲ್ಲಾ ಪೋಲಿಸ್ ಮುಖ್ಯಸ್ಥರು ಮತ್ತು ಆಹಾರ ಪಾರ್ಕುಗಳ ವ್ಯಾಪ್ತಿಯ ವೃತ್ತ ನಿರೀಕ್ಷಕರು | ಸದಸ್ಯರು |
| 4 | ಜಿಲ್ಲಾ ಜಂಟಿ ಕೃಷಿ ನಿರ್ದೇಶಕರು, ಕೃಷಿ ಇಲಾಖೆ | ಸದಸ್ಯ ಕಾರ್ಯದರ್ಶಿ |
| 5 | ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕೆ ಕೇಂದ್ರ | ಸದಸ್ಯರು |
| 6 | ಜಿಲ್ಲಾ ತೋಟಗಾರಿಕೆ ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ | ಸದಸ್ಯರು |
| 7 | ಜಿಲ್ಲಾ ಉಪ ನಿರ್ದೇಶಕರು, ಪಶುಸಂಗೋಪನೆ ಮತ್ತು ಪಶು ವೈದ್ಯಕೀಯ ಸೇವೆಗಳ ಇಲಾಖೆ | ಸದಸ್ಯರು |

| | | |
|---|---|---|
| 8 | ಜಿಲ್ಲಾ ಉಪ ನಿರ್ದೇಶಕರು, ಮೀನುಗಾರಿಕೆ ಇಲಾಖೆ | ಸದಸ್ಯರು |
| 9 | ಕೆಐಎಡಿಬಿ ಪ್ರತಿನಿಧಿಗಳು | ಸದಸ್ಯರು |
| 10 | ಕೆಪಿಟಿಸಿಎಲ್/ ವಿದ್ಯುತ್ ಸಂಸ್ಥೆಯ ಪ್ರತಿನಿಧಿಗಳು | ಸದಸ್ಯರು |
| 11 | ಲೋಕೋಪಯೋಗಿ ಇಲಾಖೆಯ ಪ್ರತಿನಿಧಿಗಳು | ಸದಸ್ಯರು |
| 12 | ಜಲ ಸಂಪನ್ಮೂಲ ಇಲಾಖೆ/ ಸಣ್ಣ ನೀರಾವರಿ ಇಲಾಖೆಯ ಪ್ರತಿನಿಧಿಗಳು | ಸದಸ್ಯರು |
| 13 | ಜಿಲ್ಲಾ ಮಟ್ಟದ ಎರಡು ಕೈಗಾರಿಕಾ ಸಂಸ್ಥೆಗಳ ಪ್ರತಿನಿಧಿಗಳು | ಸದಸ್ಯರು |

**ಜಿಲ್ಲಾ ಮಟ್ಟದ ಸಮಿತಿಯ ಕರ್ತವ್ಯ ಮತ್ತು ಜವಾಬ್ದಾರಿಗಳು:**

- ಜಿಲ್ಲಾ ಮಟ್ಟದಲ್ಲಿ ಆಹಾರ ಸಂಸ್ಕರಣಾ ಸಾಮರ್ಥ್ಯವನ್ನು ಗುರುತಿಸುವುದು ಮತ್ತು ಸೂಕ್ತ ಯೋಜನೆಗಳ ಅನುಷ್ಠಾನಕ್ಕೆ ರಾಜ್ಯಮಟ್ಟದ ಕೃಷಿ ವಾಣಿಜ್ಯ, ಆಹಾರ ಸಂಸ್ಕರಣೆ ಮತ್ತು ಕೃಷಿ ರಫ್ತು ಅಭಿವೃದ್ಧಿ ಉನ್ನತ ಮಟ್ಟದ ಸಮಿತಿಗೆ ಶಿಫಾರಸ್ಸು.
- ರಾಜ್ಯದ ಆಹಾರ ಪಾರ್ಕುಗಳ ಅಭಿವೃದ್ಧಿಗೆ ಮೂಲಭೂತ ಸೌಕರ್ಯ ಒದಗಿಸಲು ಕ್ರಮ.
- ಜಿಲ್ಲಾ ಮಟ್ಟದಲ್ಲಿ ಆಹಾರ ಸಂಸ್ಕರಣೆಗೆ ಸಂಬಂಧಿಸಿದಂತೆ ವಿವಿಧ ರಾಜ್ಯ ಸರ್ಕಾರದ ಇಲಾಖೆಗಳು ಮತ್ತು ಸಂಸ್ಥೆಗಳ ನಡುವೆ ಸಮನ್ವಯ ಸಾಧಿಸಲು ಕಾರ್ಯಕ್ರಮ/ಯೋಜನೆಗಳ ಸಮರ್ಪಕ ಅನುಷ್ಠಾನಕ್ಕೆ ಕ್ರಮ.
- ಆಹಾರ ಸಂಸ್ಕರಣೆಗೆ ಅವಶ್ಯಕವಾದ ಭೂಮಿ, ನೀರು, ವಿದ್ಯುತ್, ರಸ್ತೆ, ಒಳಚರಂಡಿ ಹಾಗೂ ಇತರೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಕ್ರಮ
- ಜಿಲ್ಲೆಯಲ್ಲಿ ಅನುಷ್ಠಾನಗೊಳಿಸುತ್ತಿರುವ ವಿವಿಧ ಆಹಾರ ಸಂಸ್ಕರಣಾ ಯೋಜನೆಗಳ ಉಸ್ತುವಾರಿ, ಪ್ರಗತಿ ಪರಿಶೀಲನೆ ಮತ್ತು ರಾಜ್ಯಮಟ್ಟದ ಸಮಿತಿಗೆ ವರದಿ ಸಲ್ಲಿಕೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

B S Nagarathnamma

(ಬಿ.ಎಸ್.ನಾಗರತ್ನಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ (ಯೋಜನೆ)

ಇವರಿಗೆ:-

1. ಪ್ರಧಾನ ಮಹಾಲೇಖಪಾಲರು (ಜಿ & ಎಸ್ ಎಸ್ ಎ) / (ಇ & ಆರ್ ಎಸ್ ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಬೆಂಗಳೂರು-01.

2. ಪ್ರಧಾನ ಮಹಾಲೇಖಪಾಲರು (A&E), ಕರ್ನಾಟಕ, ಬೆಂಗಳೂರು.
3. ಸರ್ಕಾರದ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ, ವಿಧಾನಸೌಧ, ಬೆಂಗಳೂರು.
4. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರು, ವಿಧಾನಸೌಧ, ಬೆಂಗಳೂರು.
5. ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ, ಬೆಂಗಳೂರು.
6. ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ವಿಕಾಸ ಸೌಧ, ಬೆಂಗಳೂರು.
7. ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸ ಸೌಧ, ಬೆಂಗಳೂರು.
8. ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
9. ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ಇಂಧನ ಇಲಾಖೆ, ವಿಕಾಸ ಸೌಧ, ಬೆಂಗಳೂರು.
10. ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ, ಬೆಂಗಳೂರು.
11. ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಬೆಂಗಳೂರು.
12. ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು/ ವಿಶೇಷ ಕಾರ್ಯದರ್ಶಿಗಳು, ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ ಇಲಾಖೆ, ಬೆಂಗಳೂರು.
13. ಎಲ್ಲಾ ಜಿಲ್ಲಾಧಿಕಾರಿಗಳು
14. ಎಲ್ಲಾ ಜಿಲ್ಲೆಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು
15. ಸರ್ಕಾರದ ವಿಶೇಷ ಕಾರ್ಯದರ್ಶಿ, ಆಹಾರ ಸಂಸ್ಕರಣೆ ಮತ್ತು ಬೆಳೆ ಕಟಾವು ತಂತ್ರಜ್ಞಾನ, ಕೃಷಿ ಇಲಾಖೆ.
16. ಆಯುಕ್ತರು, ಕೈಗಾರಿಕೆ ಅಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು.
17. ಕೃಷಿ ಆಯುಕ್ತರು/ಕೃಷಿ ನಿರ್ದೇಶಕರು, ಶೇಷಾದ್ರಿ ರಸ್ತೆ, ಬೆಂಗಳೂರು.
18. ನಿರ್ದೇಶಕರು, ತೋಟಗಾರಿಕೆ ಇಲಾಖೆ, ಲಾಲ್‌ಬಾಗ್ ಬೆಂಗಳೂರು.
19. ಆಯುಕ್ತರು, ಕೈಗಾರಿಕೆ ಅಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು.
20. ಆಯುಕ್ತರು, ಪಶುಸಂಗೋಪನೆ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು.
21. ನಿರ್ದೇಶಕರು, ಮೀನುಗಾರಿಕೆ ಇಲಾಖೆ, ಬೆಂಗಳೂರು.
22. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಮತ್ತು ಕಾರ್ಯನಿರ್ವಾಹಕ ಸದಸ್ಯ, ಕೆಐಎಡಿಬಿ, ಬೆಂಗಳೂರು.
23. ಎಲ್ಲಾ ಜಿಲ್ಲಾ ಪೊಲೀಸ್ ಮುಖ್ಯಸ್ಥರು ಮತ್ತು ಆಹಾರ ಪಾರ್ಕುಗಳ ವ್ಯಾಪ್ತಿಯ Circle Inspector.
24. ಎಲ್ಲಾ ಜಿಲ್ಲೆಗಳ ಜಂಟಿ ಕೃಷಿ ನಿರ್ದೇಶಕರು, ಕೃಷಿ ಇಲಾಖೆ.
25. ಎಲ್ಲಾ ಜಿಲ್ಲೆಗಳ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕೆ ಕೇಂದ್ರ

26. ಎಲ್ಲಾ ಜಿಲ್ಲೆಗಳ ತೋಟಗಾರಿಕೆ ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ.
27. ಎಲ್ಲಾ ಜಿಲ್ಲಾ ಉಪ ನಿರ್ದೇಶಕರು, ಪಶುಸಂಗೋಪನೆ ಮತ್ತು ಪಶುವೈದ್ಯಕೀಯ ಸೇವೆಗಳ ಇಲಾಖೆ
28. ಎಲ್ಲಾ ಜಿಲ್ಲಾ ಉಪ ನಿರ್ದೇಶಕರು, ಮೀನುಗಾರಿಕೆ ಇಲಾಖೆ
29. ಕನ್ವೀನರ್, SLBC, ಬೆಂಗಳೂರು.
30. ಮುಖ್ಯ ಪ್ರಧಾನ ವ್ಯವಸ್ಥಾಪಕರು, ನಬಾರ್ಡ್, ಕರ್ನಾಟಕ
31. ವ್ಯವಸ್ಥಾಪಕ ನಿರ್ದೇಶಕರು, ಪಿಟಿಪಿಸಿ, ಬೆಂಗಳೂರು.
32. ಉಪ ಪ್ರಧಾನ ವ್ಯವಸ್ಥಾಪಕರು, ಅಪೇಡಾ, ಬೆಂಗಳೂರು.
33. ವ್ಯವಸ್ಥಾಪಕ ನಿರ್ದೇಶಕರು, ಕಪೆಕ್ ಲಿ, ಬೆಂಗಳೂರು.
34. ಶಾಖೆಯ ರಕ್ಷಾ ಕಡತ / ಹೆಚ್ಚುವರಿ ಪ್ರತಿಗಳು.

(ಕ್ರ.ಸಂ:23 ರಿಂದ 28 ರವರೆಗೆ ವ್ಯವಸ್ಥಾಪಕ ನಿರ್ದೇಶಕರು, ಕಪೆಕ್ ಇವರ ಮುಖಾಂತರ)

*****